ಇಂದು ಇಸ್ಲಾಂ ಧರ್ಮವನ್ನು ಕೆಲವು ಅವಿವೇಕಿಗಳು ಮಾಡುವ ಕೆಲವೊಂದು ಕೆಟ್ಟ ಕೃತ್ಯಗಳ ಮೂಲಕ ನಿರ್ಧರಿಸಲಾಗುತ್ತಿರುವುದು ದುರಂತ. ಈ ಸಂದರ್ಭದಲ್ಲಿ ಮಾಧ್ಯಮಗಳು ಪ್ರಚಾರ ಮಾಡುವ ಇಸ್ಲಾಮಿನಿಂದ ಹಿಂದೆ ಸರಿದು ನಿಜವಾದ ಇಸ್ಲಾಂ ಎಂದರೆ ಏನು? ಅದರಲ್ಲಿರುವ ಸೌಂದರ್ಯವೇನು? ಎಂದು ನೋಡಬೇಕಾದುದು ಅತ್ಯಾವಶ್ಯಕವಾಗಿದೆ. ಕೆಲವರು ಮಾಡುವ ಕೃತ್ಯಗಳಿಂದ ಅಥವಾ ಕೆಲವರು ತಿಳುವಳಿಕೆಯಿಲ್ಲದೆ ನೀಡುವ ಹೇಳಿಕೆಗಳಿಂದ ಇಸ್ಲಾಮಿನಾದ್ಯಂತ ತುಂಬಿಕೊಂಡಿರುವ ಮೌಲ್ಯಗಳು, ಮಹಿಮೆಗಳು ಮತ್ತು ವೈಭವಗಳು ಜನಮಾನಸದಿಂದ ದೂರವಾಗುತ್ತಿವೆ.

ಸೌಂದರ್ಯವು ಇಸ್ಲಾಂ ಧರ್ಮದ ಭಾಗವಾಗಿದ್ದು ಅದು ಧರ್ಮವನ್ನು ಎದ್ದು ಕಾಣುವಂತೆ ಮಾಡುತ್ತದೆ. ಮಾನವಕುಲದ ಎಲ್ಲಾ ಶಾಶ್ವತ ಪ್ರಶ್ನೆಗಳಿಗೂ ಇಸ್ಲಾಂನಲ್ಲಿ ಉತ್ತರವಿದೆ. ನಾನೆಲ್ಲಿಂದ ಬಂದೆ? ಏಕೆ ಇಲ್ಲಿದ್ದೇನೆ?

ಎಲ್ಲಿಗೆ ಹೋಗುತ್ತೇನೆ? ಜೀವನ ಇಲ್ಲಿಗೆ ಸೀಮಿತವೇ? ಮುಂತಾದ ಪ್ರಶ್ನೆಗಳಿಗೆ ಇಸ್ಲಾಂ ಸ್ಪಷ್ಟ ಮತ್ತು ಸುಂದರ ಉತ್ತರವನ್ನು ನೀಡುತ್ತದೆ.

## ಜೀವನದ ಬಗ್ಗೆ ನಮ್ಮ ಎಲ್ಲಾ ಪ್ರಶ್ನೆಗಳಿಗೆ ಪವಿತ್ರ ಕುರ್‌ಆನ್‌ನಲ್ಲಿ ಉತ್ತರವಿದೆ

ಪವಿತ್ರ ಕುರ್‌ಆನ್ ದೇವನ ಮಹಿಮೆ ಮತ್ತು ಸೃಷ್ಟಿ ವೈಭವವನ್ನು ಬಣ್ಣಿಸುವ ಗ್ರಂಥವಾಗಿದೆ. ಅದು ದೇವನ ಕರುಣೆ ಮತ್ತು ನ್ಯಾಯಕ್ಕೆ ಸಾಕ್ಷಿಯಾಗಿದೆ. ಅದು ಇತಿಹಾಸ ಪುಸ್ತಕವೋ, ಕಥಾಸಂಕಲನವೋ, ವೈಜ್ಞಾನಿಕ ಪಠ್ಯವೋ ಅಲ್ಲ. ಆದರೂ ಅದರಲ್ಲಿ ಅವೆಲ್ಲವೂ ಇವೆ. ಪವಿತ್ರ ಕುರ್‌ಆನ್ ಮಾನವಕುಲಕ್ಕೆ ದೇವನು ನೀಡಿದ ಬಹುದೊಡ್ಡ ಕೊಡುಗೆಯಾಗಿದೆ. ಅದು ಇತರ ಪುಸ್ತಕಗಳಂತೆ ಅಲ್ಲ. ಏಕೆಂದರೆ ಅದರಲ್ಲಿ ಜೀವನದ ರಹಸ್ಯಗಳಿಗೆ ಉತ್ತರಗಳಿವೆ. ಅದು ಜೀವನಕ್ಕೆ ಸ್ಪಷ್ಟ ಗುರಿ ಮತ್ತು ಉದ್ದೇಶವನ್ನು

ತೋರಿಸುತ್ತದೆ.

ಕುರ್‌ಆನಿನ ಒಂದು ಅದ್ಭುತವೇನೆಂದರೆ ಅದು ಪ್ರವಾದಿ ಮುಹಮ್ಮದ್(ಸ) ರಿಗೆ ಅವತೀರ್ಣವಾದ ಸಮಯದಲ್ಲಿ ಹೇಗಿತ್ತೋ ಹಾಗೆಯೇ ಈಗಲೂ ಇದೆ. ಅದು ಯಾವುದೇ ತಿದ್ದುಪಡಿ ಅಥವಾ ಸೇರ್ಪಡೆಗೆ ಒಳಗಾಗಿಲ್ಲ. ಕುರ್‌ಆ-ನಿನ ಈ ಅದ್ಭುತಕ್ಕೆ ನಮ್ಮ ಜೀವನದ ಪ್ರಶ್ನೆಗಳೊಂದಿಗೆ ಸಂಬಂಧವಿದೆ. ಏಕೆಂದರೆ ನಾವು ಜೀವನದ ಬಗ್ಗೆ ಪ್ರ-ಶ್ನೆಗಳನ್ನು ಕೇಳುವಾಗ, ಅದಕ್ಕೆ ಸಿಗುವ ಉತ್ತರಗಳು ಸತ್ಯವಾಗಿರಬೇಕೆಂದು ಬಯಸುತ್ತೇವೆ. ಶತಮಾನಗ-ಳಿಂದ ಸ್ವಲ್ಪವೂ ಬದಲಾಗದ ದೇವನ ಮಾತುಗಳಿರುವ ಒಂದು ಗ್ರಂಥದಿಂದ ಉತ್ತರಗಳು ಬರುತ್ತಿವೆ ಎಂದು ತಿಳಿಯುವಾಗ ನಮಗೆ ಶಾಂತಿ ಮತ್ತು ನೆಮ್ಮದಿ ಸಿಗು-ತ್ತದೆ. ದೇವನು ಪವಿತ್ರ ಕುರ್‌ಆನನ್ನು ಅವತೀರ್ಣಗೊ-ಳಿಸಿದಾಗ ಅದನ್ನು ಸಂರಕ್ಷಿಸುವ ಭರವಸೆಯನ್ನೂ ನೀ-ಡಿದ್ದಾನೆ. ನಾವು ಇಂದು ಪವಿತ್ರ ಕುರ್‌ಆನ್‌ನಲ್ಲಿ ಓದುವ

ವಾಕ್ಯಗಳು 1400 ವರ್ಷಗಳ ಹಿಂದೆ ಪ್ರವಾದಿ ಮುಹಮ್ಮದ್(ಸ) ರ ಸಹಚರರು ಕಂಠಪಾಠ ಮಾಡಿ ಬರೆದ ವಾಕ್ಯಗಳೇ ಆಗಿವೆ.

## ಇಸ್ಲಾಂ ಧರ್ಮದಲ್ಲಿ ನಿಜವಾದ ಸಂತೋಷವಿದೆ

ನೀವು ಸಂತೋಷ ಮತ್ತು ಹರ್ಷದಿಂದ ಇರಬೇಕು, ಧನಾತ್ಮಕ ಚಿಂತನೆಗಳನ್ನು ಮಾಡಬೇಕು, ಶಾಂತಿ–ಸಮಾಧಾನದಿಂದ ಜೀವಿಸಬೇಕು ಎಂದು ಇಸ್ಲಾಂ ನಮಗೆ ಕಲಿಸುತ್ತದೆ. ದೇವನ ಎಲ್ಲಾ ಆಜ್ಞೆಗಳು ಮನುಷ್ಯನಿಗೆ ಸಂತೋಷವನ್ನು ತರುವ ಗುರಿಯನ್ನು ಹೊಂದಿವೆ. ದೇವನನ್ನು ಅರ್ಥಮಾಡಿಕೊಳ್ಳುವುದರಲ್ಲಿ ಮತ್ತು ಅವನನ್ನು ಆರಾಧಿಸುವುದರಲ್ಲಿ ಜೀವನದ ನೆಮ್ಮದಿ ಅಡಗಿದೆ. ಈ ಆರಾಧನೆಯು ನಮಗೆ ದೇವನನ್ನು ನೆನೆಯುವಂತೆ ಮಾಡುತ್ತದೆ ಮತ್ತು ಅವನ ಬಗ್ಗೆ ಜಾಗೃತಿಯನ್ನು ನೀಡುತ್ತದೆ. ಇದರಿಂದಾಗಿ ನಾವು ಕೆಟ್ಟ ಕಾರ್ಯಗಳಿಂದ, ಅನ್ಯಾಯ

ಮತ್ತು ದಬ್ಬಾಳಿಕೆಗಳಿಂದ ದೂರವಾಗುತ್ತೇವೆ.

ಆರಾಧನೆಯು ನಮ್ಮನ್ನು ನೀತಿವಂತರನ್ನಾಗಿ ಮತ್ತು ಉತ್ತಮ ಸ್ವಭಾವದವರನ್ನಾಗಿ ಮಾಡುತ್ತದೆ. ಏಕೆಂದರೆ ನಾವು ದೇವನ ಆಜ್ಞೆಗಳನ್ನು ಅನುಸರಿಸುವಾಗ, ನಮ್ಮ ಎಲ್ಲಾ ವ್ಯವಹಾರಗಳಲ್ಲಿ ಅತ್ಯುತ್ತಮ ಮಾರ್ಗದರ್ಶನದ-ಲ್ಲಿರುತ್ತೇವೆ, ಪಾರದರ್ಶಕವಾಗಿರುತ್ತೇವೆ. ನಾವು ಇಂತಹ ಅರ್ಥಪೂರ್ಣ ಜೀವನವನ್ನು ನಡೆಸುವಾಗ, ನಮ್ಮ ಸುತ್ತಲೂ ಯಾವುದೇ ಕರಾಳ ಕ್ಷಣದಲ್ಲೂ ಸಂತೋಷ-ವನ್ನು ಕಾಣಲು ಸಾಧ್ಯವಾಗುತ್ತದೆ. ಈ ಸಂತೋಷ ಕೈಯ ಸ್ಪರ್ಶದಲ್ಲಿ, ಮಳೆಯ ವಾಸನೆಯಲ್ಲಿ ಅಥವಾ ಹೊಸದಾಗಿ ಹುಟ್ಟಿದ ಹುಲ್ಲಿನಲ್ಲಿಯೂ ಇದೆ. ಇದು ತಂಪಾದ ರಾತ್ರಿ-ಯಲ್ಲಿ, ಬೆಚ್ಚಗಿನ ಬೆಂಕಿಯಲ್ಲಿ ಅಥವಾ ಬಿಸಿಲಿನ ದಿನದ-ಲ್ಲಿ ಬೀಸುವ ತಂಪಾದ ಗಾಳಿಯಲ್ಲಿಯೂ ಇದೆ. ಇಂತಹ ಸರಳ ಸಂತೋಷಗಳಿಂದ ನಮ್ಮ ಹೃದಯವು ಸಂತು-ಷ್ಟವಾಗುತ್ತದೆ. ಏಕೆಂದರೆ ಅವು ದೇವನ ಕರುಣೆ ಮತ್ತು

ಪ್ರೀತಿಯ ಅಭಿವ್ಯಕ್ತಿಗಳಾಗಿವೆ.

ಮಾನವ ಸ್ಥಿತಿಯ ಸ್ವರೂಪ ಹೇಗಿದೆ ಎಂದರೆ ದೊಡ್ಡ ಮಟ್ಟದ ದುಃಖದ ನಡುವೆಯೂ ಸಂತೋಷದ ಕ್ಷಣಗಳಿರುತ್ತವೆ ಮತ್ತು ಕೆಲವೊಮ್ಮೆ ಹತಾಶೆಯ ಕ್ಷಣಗಳಲ್ಲಿಯೂ ಸಂತೋಷವನ್ನು ತರುವ ವಿಷಯಗಳಿರುತ್ತವೆ. ಪ್ರವಾದಿ ಮುಹಮ್ಮದ್(ಸ) ಹೇಳುತ್ತಾರೆ, "ಸತ್ಯವಿಶ್ವಾಸಿಯಾದ ಮುಸಲ್ಮಾನನ ವರ್ತನೆಗಳೆಲ್ಲವೂ ನಿಜಕ್ಕೂ ಅದ್ಭುತ! ಅವೆಲ್ಲವೂ ಅವನ ಅನುಕೂಲಕ್ಕಾಗಿಯೇ ಇವೆ. ಸಂತೋಷವಾದರೆ ಅವನು ಕೃತಜ್ಞನಾಗುತ್ತಾನೆ. ಅದು ಅವನಿಗೆ ಒಳಿತಾಗಿದೆ. ಕಷ್ಟ ಬಂದಾಗ ಅವನು ತಾಳ್ಮೆವಹಿಸುತ್ತಾನೆ. ಅದು ಕೂಡ ಅವನಿಗೆ ಒಳಿತಾಗಿದೆ."

## ಯಾವುದೇ ಸಮಯದಲ್ಲೂ ದೇವನೊಡನೆ ಸಂವಹನ ಸಾಧ್ಯ

ಪ್ರತಿಯೊಬ್ಬ ಮನುಷ್ಯ ಜೀವಿ ಹುಟ್ಟುವುದು ದೇವನು

ಒಬ್ಬನೆಂಬ ಸಹಜ ತಿಳುವಳಿಕೆಯೊಂದಿಗಾಗಿದೆ. ಆದರೂ ದೇವನೊಂದಿಗೆ ಸಂವಹನ ನಡೆಸುವುದು ಅಥವಾ ಆತ-ನೊಂದಿಗೆ ಸಂಬಂಧ ಸ್ಥಾಪಿಸುವುದು ಹೇಗೆಂದು ತಿಳಿ-ಯದವರು ತಮ್ಮ ಅಸ್ತಿತ್ವವನ್ನು ಗೊಂದಲಪೂರ್ಣವಾಗಿ ಕಾಣುತ್ತಾರೆ. ದೇವನೊಂದಿಗೆ ಸಂವಹನ ನಡೆಸಲು ಕಲಿ-ಯುವುದು ಮತ್ತು ಅವನನ್ನು ಆರಾಧಿಸುವುದು ಜೀವನ-ಕ್ಕೆ ಹೊಸ ಅರ್ಥವನ್ನು ನೀಡುತ್ತದೆ.

ಇಸ್ಲಾಂ ಧರ್ಮದ ಪ್ರಕಾರ, ದೇವನೊಡನೆ ಯಾವುದೇ ಸಮಯದಲ್ಲೂ ಯಾವುದೇ ಸ್ಥಳದಲ್ಲೂ ಸಂವಹನ ಮಾಡಬಹುದು. ನಾವು ಅವನನ್ನು ಕರೆದು ಪ್ರಾರ್ಥಿ-ಸಿದರೆ ಸಾಕು. ಅವನು ನಮಗೆ ಉತ್ತರ ನೀಡುತ್ತಾನೆ. ದೇವನನ್ನು ಪದೇ ಪದೇ ಕರೆದು ಪ್ರಾರ್ಥಿಸಬೇಕೆಂದು ಪ್ರವಾದಿ ಮುಹಮ್ಮದ್(ಸ) ಸಲಹೆ ನೀಡುತ್ತಾರೆ. ಅವರು ಹೇಳುತ್ತಾರೆ: “ಅಲ್ಲಾಹು ಹೇಳುತ್ತಾನೆ: ನನ್ನ ದಾಸ ನನ್ನ ಬಗ್ಗೆ ಹೇಗೆ ಭಾವಿಸುತ್ತಾನೋ ನಾನು ಹಾಗಿರುತ್ತೇನೆ.

(ಅಂದರೆ ನಾನು ಅವನಿಗೆ ಏನು ಮಾಡಬಹುದೆಂದು ಅವನು ಯೋಚಿಸುತ್ತಾನೋ ಅದನ್ನು ನಾನು ಅವನಿಗೆ ಮಾಡಲು ಸಮರ್ಥನಾಗಿದ್ದೇನೆ). ಅವನು ನನ್ನನ್ನು ಸ್ಮ-ರಿಸುವಾಗಲೆಲ್ಲಾ ನಾನು ಅವನೊಂದಿಗೆ ಇರುತ್ತೇನೆ. ಅವನು ನನ್ನನ್ನು ಮನದಲ್ಲಿಯೇ ಸ್ಮರಿಸಿದರೆ, ನಾನು ಕೂಡ ಅವನನ್ನು ಮನದಲ್ಲಿಯೇ ಸ್ಮರಿಸುತ್ತೇನೆ. ಅವನು ನನ್ನನ್ನು ಜನರ ಗುಂಪಿನಲ್ಲಿ ಸ್ಮರಿಸಿದರೆ, ನಾನು ಅವರಿ-ಗಿಂತ ಉತ್ತಮವಾದ ಗುಂಪಿನಲ್ಲಿ ಅವನನ್ನು ಸ್ಮರಿಸುತ್ತೇನೆ. ಅವನು ನನಗೆ ಒಂದು ಗೇಣು ಹತ್ತಿರವಾದರೆ, ನಾನು ಅವನಿಗೆ ಒಂದು ಮೊಳ ಹತ್ತಿರವಾಗುತ್ತೇನೆ. ಅವನು ನನಗೆ ಒಂದು ಮೊಳ ಹತ್ತಿರವಾದರೆ, ನಾನು ಅವನಿಗೆ ಒಂದು ಮಾರು ಹತ್ತಿರವಾಗುತ್ತೇನೆ. ಅವನು ನನ್ನ ಬಳಿಗೆ ನಡೆದುಕೊಂಡು ಬಂದರೆ, ನಾನು ಅವನ ಬಳಿಗೆ ಓಡೋಡಿ ಬರುತ್ತೇನೆ." ಇದೇ ವಿಷಯವನ್ನು ದೇವನು ಪವಿತ್ರ ಕುರ್‌ಆನ್‌ನಲ್ಲಿ ಹೇಳುತ್ತಾನೆ, "ನನ್ನನ್ನು ಸ್ಮರಿಸಿರಿ.

ನಾನು ನಿಮ್ಮನ್ನು ಸ್ಮರಿಸುತ್ತೇನೆ…” (ಕುರ್‌ಆನ್ 2:152)

ದೇವನನ್ನು ಯಾವುದೇ ಭಾಷೆಯಲ್ಲಿ, ಯಾವುದೇ ಸಮಯದಲ್ಲಿ, ಯಾವುದೇ ಸ್ಥಳದಲ್ಲಿ ಕರೆದು ಪ್ರಾರ್ಥಿಸಬಹುದು. ಮುಸಲ್ಮಾನರು ದಿನನಿತ್ಯ ಐದು ಬಾರಿ ನಮಾಝ್ ಮಾಡುತ್ತಾರೆ. ಕುತೂಹಲಕಾರಿ ಎಂದರೆ ನಮಾಝನ್ನು ಸೂಚಿಸುವ ಅರೇಬಿಕ್ ಪದ ‘ಸಲಾ’, ಎಂದರೆ ಸಂಪರ್ಕ. ಮುಸಲ್ಮಾನರು ನಮಾಝಿನ ಮೂಲಕ ದೇವನೊಂದಿಗೆ ಸಂಪರ್ಕ ಹೊಂದುತ್ತಾರೆ ಮತ್ತು ಅವನೊಂದಿಗೆ ಸುಲಭವಾಗಿ ಸಂವಹನ ನಡೆಸುತ್ತಾರೆ. ನಾವು ಎಂದಿಗೂ ಒಂಟಿಯಲ್ಲ ಅಥವಾ ದೇವನ ಕರುಣೆ, ಕ್ಷಮೆ ಮತ್ತು ಪ್ರೀತಿಯಿಂದ ನಾವು ದೂರವಿರುವುದಿಲ್ಲ ಎಂಬ ಭಾವನೆಯನ್ನು ನಮಾಝ್ ನೀಡುತ್ತದೆ.

## ಇಸ್ಲಾಂ ಧರ್ಮದಲ್ಲಿ ನಿಜವಾದ ಶಾಂತಿಯಿದೆ

ಇಸ್ಲಾಂ, ಮುಸ್ಲಿಂ, ಸಲಾಂ ಎಂಬ ಪದಗಳು ಅರೇಬಿಕ್

ಮೂಲ ಪದ “ಸ-ಲ-ಮ” ದಿಂದ ಬಂದಿವೆ. ಇದು ಶಾಂತಿ, ಸುರಕ್ಷತೆ ಮತ್ತು ಸಂರಕ್ಷಣೆಯನ್ನು ಸೂಚಿಸುತ್ತದೆ. ಒಬ್ಬ ವ್ಯಕ್ತಿ ಸ್ವಯಂ ತನ್ನನ್ನು ದೇವನ ಚಿತ್ತಕ್ಕೆ ಒಪ್ಪಿಸಿದಾಗ ಸಹಜ ಸುರಕ್ಷತೆ ಮತ್ತು ಶಾಂತಚಿತ್ತತೆಯನ್ನು ಅನುಭವಿಸುತ್ತಾನೆ. ಸಲಾಂ ಒಂದು ವಿವರಣಾತ್ಮಕ ಪದವಾಗಿದ್ದು ಅದು ಶಾಂತಿ ಮತ್ತು ಸಮಾಧಾನಕ್ಕಿಂತ ಹೆಚ್ಚಿನದನ್ನು ನೀಡುತ್ತದೆ. ಅದು ಸುರಕ್ಷತೆ, ಅಭಯ ಮತ್ತು ಸಮರ್ಪಣೆಯ ಪರಿಕಲ್ಪನೆಗಳನ್ನು ಸಹ ಒಳಗೊಂಡಿದೆ. ಪೂರ್ಣ ಅರ್ಥದಲ್ಲಿ ಇಸ್ಲಾಂ ಎಂದರೆ ಸುರಕ್ಷತೆ, ಅಭಯ, ಶಾಂತಿ ಮತ್ತು ಸಾಮರಸ್ಯವನ್ನು ನೀಡುವ ಏಕ ದೇವನಿಗೆ ವಿಧೇಯರಾಗುವುದು ಎಂದರ್ಥ. ಇದು ನಿಜವಾದ ಶಾಂತಿಯಾಗಿದೆ. ಮುಸ್ಲಿಮರು ‘ಅಸ್ಸಲಾಂ ಅಲೈಕುಮ್’ ಹೇಳುತ್ತಾ ಪರಸ್ಪರ ಶುಭಾಶಯ ಕೋರುತ್ತಾರೆ. ಈ ಅರೇಬಿಕ್ ಪದಗಳ ಅರ್ಥ ‘ದೇವನು ನಿಮಗೆ ಶಾಂತಿ ಮತ್ತು ಸುರಕ್ಷತೆಯನ್ನು ನೀಡಲಿ’. ಈ ಸಂಕ್ಷಿಪ್ತ ಅರೇಬಿಕ್ ಪದಗಳು ಮುಸ್ಲಿಮರಿ-

ಗೆ ಅವರು ಪರಸ್ಪರ ಅಪರಿಚಿತರಲ್ಲ ಎಂಬ ಭಾವನೆಯನ್ನು ನೀಡುತ್ತದೆ. ಈ ಶುಭಾಶಯವು ಮುಸಲ್ಮಾನರನ್ನು ಶಾಂತಿ ಮತ್ತು ಐಕ್ಯತೆಯಿಂದ ಬಂಧಿಸಲ್ಪಟ್ಟ ವಿಶ್ವವ್ಯಾಪಿ ಸಮುದಾಯವಾಗಿರಲು ಪ್ರೋತ್ಸಾಹಿಸುತ್ತದೆ. ಇಸ್ಲಾಂ ಧರ್ಮವು ಆಂತರಿಕ ಶಾಂತಿ ಮತ್ತು ನೆಮ್ಮದಿಯೊಂದಿಗೆ ಅಂತರ್ಗತ ಸಂಬಂಧ ಹೊಂದಿದೆ.

## ಇಸ್ಲಾಮಿನಲ್ಲಿ ದೇವನನ್ನು ತಿಳಿದುಕೊಳ್ಳುವ ಅವಕಾಶವಿದೆ

ಇಸ್ಲಾಂ ಧರ್ಮದ ಮೊದಲ ಮತ್ತು ಪ್ರಮುಖ ತತ್ವ ಒಬ್ಬ ದೇವನನ್ನು ನಂಬುವುದು. ಇಡೀ ಕುರ್‌ಆನ್ ಈ ತತ್ವಕ್ಕೆ ಸಮರ್ಪಿತವಾಗಿದೆ. ದೇವನ ಬಗ್ಗೆ, ಅವನ ಅಸ್ತಿತ್ವ, ಹೆಸರು, ಗುಣಲಕ್ಷಣಗಳು ಮತ್ತು ಕ್ರಿಯೆಗಳ ಬಗ್ಗೆ ಕುರ್‌ಆನ್ ನೇರವಾಗಿ ಮಾತನಾಡುತ್ತದೆ. ಪ್ರಾರ್ಥನೆಯು ನಮ್ಮನ್ನು ದೇವನೊಡನೆ ಸಂಪರ್ಕಿಸುತ್ತದೆ. ಆದರೆ

ದೇವನ ಹೆಸರುಗಳು ಮತ್ತು ಗುಣಲಕ್ಷಣಗಳನ್ನು ಅಕ್ಷರಾರ್ಥದಲ್ಲಿ ತಿಳಿದುಕೊಂಡು ಅರ್ಥಮಾಡಿಕೊಳ್ಳುವುದು ಒಂದು ಪ್ರಮುಖ ಮತ್ತು ವಿಶಿಷ್ಟವಾದ ಅವಕಾಶವಾಗಿದ್ದು ಇದು ಇಸ್ಲಾಮಿನಲ್ಲಿ ಮಾತ್ರ ಲಭ್ಯವಿದೆ. ದೇವನನ್ನು ಅಕ್ಷರಾರ್ಥದಲ್ಲಿ ತಿಳಿದುಕೊಳ್ಳುವ ಪ್ರಯತ್ನ ಮಾಡದವರು ತಮ್ಮ ಅಸ್ತಿತ್ವದ ಸ್ವರೂಪದಲ್ಲಿ ಗೊಂದಲವನ್ನು ಕಾಣುತ್ತಾರೆ. ಒಬ್ಬ ಮುಸಲ್ಮಾನ ಸದಾ ದೇವನನ್ನು ಸ್ಮರಿಸಬೇಕು ಮತ್ತು ಅವನಿಗೆ ಕೃತಜ್ಞನಾಗಿರಬೇಕು. ದೇವನ ಸುಂದರವಾದ ಹೆಸರುಗಳು ಮತ್ತು ಗುಣಲಕ್ಷಣಗಳ ಬಗ್ಗೆ ಆಲೋಚಿಸಿ ಅರ್ಥಮಾಡಿಕೊಳ್ಳುವ ಮೂಲಕ ಒಬ್ಬ ವ್ಯಕ್ತಿಗೆ ಇದು ಸಾಧ್ಯವಾಗುತ್ತದೆ. ಇದರ ಮೂಲಕ ಸೃಷ್ಟಿಕರ್ತನನ್ನು ತಿಳಿದುಕೊಳ್ಳಲೂ ಸಾಧ್ಯವಾಗುತ್ತದೆ.

## ಇಸ್ಲಾಂ ಪರಿಸರ ಕಾಳಜಿಯನ್ನು ಕಲಿಸುತ್ತದೆ

ಮಾನವರು ಸಸ್ಯ, ಪ್ರಾಣಿ, ಸಾಗರ, ನದಿ, ಮರುಭೂಮಿ

ಮತ್ತು ಫಲವತ್ತಾದ ಭೂಮಿ ಸೇರಿದಂತೆ ಭೂಮಿ ಮತ್ತು ಅದರ ಮೇಲಿರುವ ಎಲ್ಲ ವಸ್ತುಗಳ ಪಾಲಕರು. ಇವೆಲ್ಲ-ವನ್ನೂ ಮನುಷ್ಯರಿಗಾಗಿ ಸೃಷ್ಟಿಸಲಾಗಿದೆ. ನಾವು ಯಶ-ಸ್ವಿಯಾಗಿ ಬದುಕಲು ಮತ್ತು ಬೆಳೆಯಲು ಬೇಕಾದ ವಸ್ತು-ಗಳನ್ನು ದೇವನು ನಮಗೆ ಒದಗಿಸುತ್ತಾನೆ. ಆದರೆ ನಮಗೆ ಅವುಗಳನ್ನು ನೋಡಿಕೊಳ್ಳುವ ಮತ್ತು ಅವುಗಳನ್ನು ಭವಿ-ಷ್ಯದ ಪೀಳಿಗೆಗೆ ಸಂರಕ್ಷಿಸುವ ಹೊಣೆಗಾರಿಕೆಯಿದೆ.

1986 ರಲ್ಲಿ ವಿಶ್ವ ವನ್ಯಜೀವಿ ನಿಧಿಯ ಅಂದಿನ ಅಧ್ಯಕ್ಷ ರಾಜಕುಮಾರ ಫಿಲಿಪ್ ನೈಸರ್ಗಿಕ ಜಗತ್ತನ್ನು, ಪರಿಸರ-ವನ್ನು ಉಳಿಸಲು ಧರ್ಮ ಹೇಗೆ ಸಹಾಯ ಮಾಡುತ್ತದೆ ಎಂದು ಚರ್ಚಿಸಲು ವಿಶ್ವದ ಐದು ಪ್ರಮುಖ ಧರ್ಮಗಳ ನಾಯಕರನ್ನು ಇಟಲಿಯ ಅಸ್ಸಿಸಿ ಎಂಬ ನಗರದಲ್ಲಿ ನಡೆದ ಸಭೆಗೆ ಆಹ್ವಾನಿಸಿದರು. ಅಲ್ಲಿ ಇಸ್ಲಾಂ ಧರ್ಮದ ಹೇಳಿಕೆ ಈ ವಿಷಯಗಳನ್ನು ಒಳಗೊಂಡಿತ್ತು:

ಇಸ್ಲಾಂ ಒಂದು ಮಧ್ಯಮ ಮಾರ್ಗವಾಗಿದ್ದು ನಾವು ಈ

ಮಾರ್ಗದಲ್ಲಿ ಹೇಗೆ ನಡೆಯುತ್ತೇವೆ, ನಮ್ಮ ಸುತ್ತಲಿನ ಇಡೀ ಸೃಷ್ಟಿಯಲ್ಲಿ ನಾವು ಹೇಗೆ ಸಮತೋಲನ ಮತ್ತು ಸಾಮರಸ್ಯವನ್ನು ಕಾಪಾಡಿಕೊಳ್ಳುತ್ತೇವೆ ಎಂಬ ಬಗ್ಗೆ ನಾವು ಹೊಣೆಗಾರರಾಗಿದ್ದೇವೆ.... 'ಯಾರು ಒಂದು ಮರವನ್ನು ನೆಟ್ಟು ಅದು ಪಕ್ವವಾಗುವವರೆಗೆ ಮತ್ತು ಫಲ ನೀಡುವವರೆಗೆ ಅದನ್ನು ಶ್ರದ್ಧೆಯಿಂದ ಆರೈಕೆ ಮಾಡು-ತ್ತಾರೋ ಅವರಿಗೆ ಪ್ರತಿಫಲವಿದೆ' ಎಂದು ಪ್ರವಾದಿ ಮು-ಹಮ್ಮದ್(ಸ) ಹೇಳಲು ಕಾರಣವಾದದ್ದು ಈ ಮೌಲ್ಯಗಳೇ ಆಗಿವೆ.... ಈ ಎಲ್ಲಾ ಕಾರಣಗಳಿಂದಾಗಿ ಮುಸಲ್ಮಾನರು ತಮ್ಮನ್ನು ತಾವೇ ಜಗತ್ತು ಮತ್ತು ಪರಿಸರದ ಬಗ್ಗೆ ಜವಾ-ಬ್ದಾರಿಯನ್ನು ಹೊಂದಿದವರೆಂದು ಪರಿಗಣಿಸುತ್ತಾರೆ. ಇತರ ಅನೇಕ ಧರ್ಮಗಳಿಗಿಂತ ಭಿನ್ನವಾಗಿ, ಮುಸ್ಲಿಮರಿಗೆ ಸುಗ್ಗಿಯ ಅಥವಾ ಜಗತ್ತಿಗೆ ಧನ್ಯವಾದ ಅರ್ಪಿಸುವಂತಹ ಯಾವುದೇ ನಿರ್ದಿಷ್ಟ ಹಬ್ಬಗಳಿಲ್ಲ. ಬದಲಾಗಿ ಪರಿಸರವ-ನ್ನು ಸೃಷ್ಟಿಸಿದ್ದಕ್ಕಾಗಿ ಅವರು ಅನುದಿನವೂ ಅಲ್ಲಾಹನಿಗೆ

ಧನ್ಯವಾದ ಅರ್ಪಿಸುತ್ತಾರೆ.

## ಇಸ್ಲಾಂ ಎಂದರೆ ಗೌರವ

ಮಾನವೀಯತೆಗೆ ಮತ್ತು ನಾವು ವಾಸಿಸುವ ವಿಶ್ವಕ್ಕೆ ನೀಡುವ ಗೌರವವು ಇಸ್ಲಾಂ ಧರ್ಮದ ಮತ್ತೊಂದು ಸುಂದರ ಅಂಶವಾಗಿದೆ. ಸೃಷ್ಟಿಯನ್ನು ಗೌರವ, ಆದರ ಮತ್ತು ಘನತೆಯಿಂದ ಕಾಣುವುದು ಪ್ರತಿಯೊಬ್ಬ ಮನುಷ್ಯನ ಜವಾಬ್ದಾರಿಯೆಂದು ಇಸ್ಲಾಂ ಸ್ಪಷ್ಟವಾಗಿ ಹೇಳುತ್ತದೆ. ಸ್ವತಃ ಸೃಷ್ಟಿಕರ್ತನೇ ಗೌರವಕ್ಕೆ ಹೆಚ್ಚು ಅರ್ಹನಾಗಿದ್ದು ಅವನ ಆಜ್ಞೆಗಳನ್ನು ಪ್ರೀತಿಸುವ ಮತ್ತು ಪಾಲಿಸುವ ಮೂಲಕ ಗೌರವ ನೀಡುವ ಪ್ರಕ್ರಿಯೆ ಆರಂಭವಾಗುತ್ತದೆ.

ದೇವನ ಮೇಲಿನ ಸಂಪೂರ್ಣ ಗೌರವವು ಇಸ್ಲಾಂನಲ್ಲಿ ಅಂತರ್ಗತವಾಗಿರುವ ಎಲ್ಲಾ ನಡವಳಿಕೆಗಳನ್ನು ಮತ್ತು ನೈತಿಕತೆಯ ಉನ್ನತ ಗುಣಮಟ್ಟವನ್ನು ನಮ್ಮ ಜೀವನ ಮತ್ತು ನಮ್ಮ ಸುತ್ತಮುತ್ತಲಿನವರ ಜೀವನದಲ್ಲಿ ಹರಿಯು-

ವಂತೆ ಮಾಡುತ್ತದೆ. ಇಸ್ಲಾಂ ಗೌರವವನ್ನು ಶಾಂತಿ, ಪ್ರೀತಿ ಮತ್ತು ಸಹಾನುಭೂತಿಯೊಂದಿಗೆ ಬಂಧಿಸುತ್ತದೆ. ಇತರರ ಘನತೆ, ಖ್ಯಾತಿ ಮತ್ತು ಖಾಸಗಿತನವನ್ನು ಗೌರವಿಸುವುದು ಇಸ್ಲಾಮಿನಲ್ಲಿ ಕಡ್ಡಾಯ. ಗೌರವವು ಪರದೂಷಣೆ, ಚಾಡಿ, ಸುಳ್ಳು-ಸುದ್ದಿ ಮತ್ತು ಗಾಸಿಪ್‌ಗಳಿಂದ ಸಂಪೂರ್ಣವಾಗಿ ದೂರವಿರಬೇಕಾಗಿದೆ. ಜನರ ನಡುವೆ ಅಪನಂಬಿಕೆಯನ್ನು ಬಿತ್ತುವ ಅಥವಾ ವಿನಾಶಕ್ಕೆ ಕಾರಣವಾಗುವ ಪಾಪಗಳನ್ನು ಮಾಡದಿರುವುದು ಸಹ ಗೌರವದ ಒಂದು ಭಾಗವಾಗಿದೆ.

ನಾವು ನಮಗಾಗಿ ಪ್ರೀತಿಸುವುದನ್ನು ನಮ್ಮ ಸಹೋದರ ಸಹೋದರಿಯರಿಗಾಗಿಯೂ ಪ್ರೀತಿಸಬೇಕು ಎನ್ನುವುದು ಇಸ್ಲಾಮಿನ ಪ್ರಕಾರ ಗೌರವವಾಗಿದೆ. ಇತರರು ನಮ್ಮನ್ನು ಹೇಗೆ ಸಹಾನುಭೂತಿ, ಪ್ರೀತಿ ಮತ್ತು ಕರುಣೆಯಿಂದ ಕಾಣಬೇಕೆಂದು ನಾವು ಬಯಸುತ್ತೇವೋ ಹಾಗೆಯೇ ನಾವೂ ಸಹ ಅವರನ್ನು ಕಾಣುವುದಾಗಿದೆ

ನಿಜವಾದ ಗೌರವ. ನಾವು ಹೆಚ್ಚಾಗಿ ಇತರರಿಂದ ಗೌರ-ವವನ್ನು ಬಯಸುತ್ತೇವೆ. ಆದರೆ ನಾವು ವಾಸಿಸುವುದು ನಮ್ಮ ಸುತ್ತಮುತ್ತಲಿನವರನ್ನು ಗೌರವಿಸದಂತಹ ಒಂದು ಯುಗದಲ್ಲಾಗಿದೆ.

ದೇವನ ಚಿತ್ತಕ್ಕೆ ಪೂರ್ಣ ಹೃದಯದಿಂದ ಸಮರ್ಪಿ-ಸುವ ಮೂಲಕ ಕಳೆದುಹೋದ ಗೌರವವನ್ನು ಮರಳಿ ಪಡೆಯಲು ಇಸ್ಲಾಂ ನಮಗೆ ಅನುವು ಮಾಡಿಕೊಡು-ತ್ತದೆ. ಆದರೆ ನಾವು ಹೇಗೆ ಮತ್ತು ಏಕೆ ದೇವನ ಚಿತ್ತಕ್ಕೆ ಶರಣಾಗುತ್ತೇವೆ ಎಂದು ನಮಗೆ ಅರ್ಥವಾಗದಿದ್ದರೆ ನಮಗೆ ಬೇಕಾದ ಮತ್ತು ಅಗತ್ಯವಿರುವ ಗೌರವವನ್ನು ಪಡೆಯಲು ಸಾಧ್ಯವಿಲ್ಲ. ದೇವನನ್ನು ಆರಾಧಿಸುವುದು ನಮ್ಮ ಜೀವನದ ಏಕೈಕ ಉದ್ದೇಶ ಎಂದು ಪವಿತ್ರ ಕು-ರ್‌ಆನ್‌ನಲ್ಲಿ ದೇವನು ನಮಗೆ ನೆನಪಿಸುತ್ತಾನೆ. “ನನ್ನ-ನ್ನು ಆರಾಧಿಸುವುದಕ್ಕಾಗಿಯಲ್ಲದೆ ನಾನು ಜಿನ್ನ್ (ಯಕ್ಷ) ಮತ್ತು ಮಾನವಕುಲವನ್ನು ಸೃಷ್ಟಿಸಿಲ್ಲ.” (ಕುರ್‌ಆನ್

51:56)

## ಪುರುಷರು ಮತ್ತು ಮಹಿಳೆಯರು ಸಮಾನರು

ವಿಶ್ವಾಸಿಗಳೆಲ್ಲರೂ ಸಮಾನರು ಮತ್ತು ದೇವಭಕ್ತಿಯ ಹೆಚ್ಚಳವು ಮಾತ್ರ ಒಬ್ಬರನ್ನು ಇನ್ನೊಬ್ಬರಿಗಿಂತ ಶ್ರೇಷ್ಠ-ಗೊಳಿಸುತ್ತದೆಯೆಂದು ಇಸ್ಲಾಂ ಹೇಳುತ್ತದೆ. ಪುರುಷರು ಮತ್ತು ಮಹಿಳೆಯರು ಇಬ್ಬರೂ ಜೀವನದ ಎಲ್ಲ ಕ್ಷೇ-ತ್ರಗಳಲ್ಲಿಯೂ ಸದಾಚಾರದ ಉನ್ನತ ಗುಣಮಟ್ಟವ-ನ್ನು ಪ್ರದರ್ಶಿಸಿರುವುದನ್ನು ಇಸ್ಲಾಮಿಕ್ ಚರಿತ್ರೆಯಲ್ಲಿ ಕಾಣಬಹುದು. ಪುರುಷನಂತೆಯೇ ಮಹಿಳೆ ಕೂಡ ದೇವನನ್ನು ಆರಾಧಿಸಲು ಮತ್ತು ಅವನ ಹಕ್ಕುಗಳನ್ನು ಪೂರೈಸಲು ಬಾಧ್ಯಸ್ಥಳಾಗಿರುತ್ತಾಳೆ. “ಗಂಡಾಗಲಿ, ಹೆಣ್ಣಾ-ಗಲಿ, ಯಾರು ಒಳ್ಳೆಯ ಕಾರ್ಯಗಳನ್ನು ಮಾಡುತ್ತಾರೋ ಮತ್ತು ದೇವನ ಏಕತೆಯನ್ನು ನಂಬುತ್ತಾರೋ ಅವರು ಸ್ವರ್ಗವನ್ನು ಪ್ರವೇಶಿಸುತ್ತಾರೆ. ಅವರಿಗೆ ಸ್ವಲ್ಪವೂ ಅನ್ಯಾ-

ಯವಾಗಲಾರದು." (ಕುರ್‌ಆನ್ 4:124)

ಸಮಾನತೆ ಎಂದರೆ ಪುರುಷರು ಮತ್ತು ಮಹಿಳೆಯರು ಒಂದೇ ಎಂಬುದನ್ನು ಇಸ್ಲಾಂ ಒಪ್ಪುವುದಿಲ್ಲ. ಸಮಾನತೆ ಎನ್ನುವಾಗ ಇಸ್ಲಾಂ ಶರೀರಶಾಸ್ತ್ರ, ಪ್ರಕೃತಿ ಮತ್ತು ಮನೋಧರ್ಮದಲ್ಲಿನ ಅವರ ವ್ಯತ್ಯಾಸಗಳನ್ನು ಗಣನೆಗೆ ತೆಗೆದುಕೊಳ್ಳುತ್ತದೆ. ಇದು ಶ್ರೇಷ್ಠತೆ ಅಥವಾ ಕೀಳರಿಮೆಯ ಪ್ರಶ್ನೆಯಲ್ಲ, ಬದಲಾಗಿ ಇದು ನೈಸರ್ಗಿಕ ಸಾಮರ್ಥ್ಯಗಳ ಮತ್ತು ಜೀವನದ ವಿಭಿನ್ನ ಪಾತ್ರಗಳನ್ನು ನಿರ್ವಹಿಸುವ ಪ್ರಶ್ನೆಯಾಗಿದೆ. ಇಸ್ಲಾಂ ಧರ್ಮದ ನಿಯಮಗಳು ನ್ಯಾಯಸಮ್ಮತ ಮತ್ತು ನ್ಯಾಯಯುತವಾಗಿದ್ದು ಈ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳುತ್ತದೆ. ಪುರುಷರಿಗೆ ಉದ್ಯೋಗ ಮಾಡಿ ತಮ್ಮ ಕುಟುಂಬವನ್ನು ಪೋಷಿಸುವ ಕರ್ತವ್ಯವನ್ನು ಮತ್ತು ಮಹಿಳೆಯರಿಗೆ ಮಾತೃತ್ವ ಮತ್ತು ಮನೆಕೆಲಸದ ಪಾತ್ರವನ್ನು ವಹಿಸಿಕೊಡಲಾಗಿದೆ. ಆದಾಗ್ಯೂ ಆ ಪಾತ್ರಗಳು ಬದಲಾವಣೆರಹಿತವಲ್ಲ ಎಂದು ಇಸ್ಲಾಂ

ಹೇಳುವುದಿಲ್ಲ. ಮಹಿಳೆಯರು ಬಯಸಿದರೆ ಉದ್ಯೋಗ ಮಾಡಬಹುದು ಅಥವಾ ಸಮಾಜಕ್ಕೆ ಸೇವೆ ಸಲ್ಲಿಸಬಹುದು. ಪುರುಷರಿಗೆ ತಮ್ಮ ಮಕ್ಕಳ ಅಥವಾ ಮನೆಯ ಜವಾಬ್ದಾರಿಯನ್ನು ವಹಿಸಿಕೊಳ್ಳಲೂ ಸಾಧ್ಯವಿದೆ. ಆದರೆ ಗಮನಾರ್ಹ ಸಂಗತಿಯೇನೆಂದರೆ ಮಹಿಳೆಯರು ಗಳಿಸಿದ ಹಣವು ಅವರ ಸ್ವಂತದ್ದಾಗಿದ್ದು ಅದನ್ನು ಅವರು ಕುಟುಂಬಕ್ಕಾಗಿ ಖರ್ಚ ಮಾಡಬೇಕಿಲ್ಲ. ಕುಟುಂಬಕ್ಕೆ ಆರ್ಥಿಕ ಆಧಾರವಾಗಿ ನಿಲ್ಲಬೇಕಾದ ಕರ್ತವ್ಯ ಪುರುಷನದ್ದಾಗಿದೆ.

## ಇಸ್ಲಾಂ ಸುಧಾರಣೆಗೆ ವಿಪುಲ ಅವಕಾಶ ನೀಡುತ್ತದೆ

ಇಸ್ಲಾಮಿನ ಪ್ರಕಾರ ಮನುಷ್ಯರೆಲ್ಲರೂ ಸುಧಾರಣೆಗೆ ಶಕ್ತರಾಗಿದ್ದಾರೆ. ವೈಫಲ್ಯದ ಸಂಭವನೀಯತೆಗಿಂತಲೂ ಯಶಸ್ವಿ ಸುಧಾರಣೆಯ ಸಾಧ್ಯತೆಯು ಹೆಚ್ಚಾಗಿದೆ

ಎಂದು ಇಸ್ಲಾಂ ನಂಬುತ್ತದೆ. ದೇವನು ಮಾನವಕುಲಕ್ಕೆ ಸುಧಾರಣೆಯ ಅನೇಕ ಅವಕಾಶಗಳನ್ನು ಕೊಟ್ಟಿದ್ದಾನೆ. ಇದು ಒಂದು ಬಾರಿಯೋ ಎರಡು ಬಾರಿಯೋ ಅಲ್ಲ. ಬದಲಾಗಿ ಮರಣದ ತನಕ ಮನುಷ್ಯನಿಗೆ ಸುಧಾರಣೆಯಾಗುವ ಅವಕಾಶವಿದೆ. ಮನುಷ್ಯನು ತಪ್ಪೆಸಗಿದ ನಂತರ ವಿಷಾದಪಟ್ಟು ಸುಧಾರಣೆಯಾಗಲು ಬಯಸಿದರೆ ದೇವನು ಅವನನ್ನು ಕ್ಷಮಿಸುತ್ತಾನೆ. ಮಾಡಿದ ತಪ್ಪಿಗಾಗಿ ಜೀವನಪರ್ಯಂತ ಕೊರಗಬೇಕೆಂದು ಇಸ್ಲಾಂ ಹೇಳುವುದಿಲ್ಲ.

## ದೇವನು ಸೌಂದರ್ಯವನ್ನು ಎಲ್ಲಾ ರೀತಿಯಲ್ಲೂ ಪ್ರೀತಿಸುತ್ತಾನೆ

ಪ್ರವಾದಿ ಮುಹಮ್ಮದ್(ಸ) ಹೇಳುತ್ತಾರೆ, "ಹೃದಯದಲ್ಲಿ ಸಾಸಿವೆ ಕಾಳಿನಷ್ಟು ಗಾತ್ರದ ಅಹಂಕಾರವಿರುವ ವ್ಯಕ್ತಿ ಸ್ವರ್ಗವನ್ನು ಪ್ರವೇಶಿಸಲಾರ." ಆಗ ಒಬ್ಬ ಅನುಯಾಯಿ,

“ಒಬ್ಬ ವ್ಯಕ್ತಿ ತನ್ನ ಬಟ್ಟೆಗಳನ್ನು ಚೆನ್ನಾಗಿ ಕಾಣಲು ಮತ್ತು ಬೂಟುಗಳನ್ನು ಚೆನ್ನಾಗಿ ಕಾಣಲು ಇಷ್ಟಪಟ್ಟರೆ ಅದು ಅಹಂಕಾರವೇ?” ಎಂದು ಕೇಳಿದಾಗ, “ದೇವನು ಸುಂದರನು ಮತ್ತು ಸೌಂದರ್ಯವನ್ನು ಪ್ರೀತಿಸುತ್ತಾನೆ. ಅಹಂಕಾರ ಎಂದರೆ ಸತ್ಯವನ್ನು ನಿರಾಕರಿಸುವುದು ಮತ್ತು ಜನರನ್ನು ಕೀಳಾಗಿ ಕಾಣುವುದು” ಎಂದು ಅವರು ಉತ್ತರಿಸುತ್ತಾರೆ.

ಸೌಂದರ್ಯವು ಕುರೂಪಕ್ಕೆ ವಿರುದ್ಧವಾಗಿದೆ. ಸೃಷ್ಟಿಯಲ್ಲಿರುವ ಸೌಂದರ್ಯವು ದೇವನ ಸೌಂದರ್ಯ ಮತ್ತು ಶಕ್ತಿಯನ್ನು ದೃಢಪಡಿಸುತ್ತದೆ. ಸೌಂದರ್ಯವನ್ನು ಸೃಷ್ಟಿಸಿದವನೇ ಸೌಂದರ್ಯಕ್ಕೆ ಹೆಚ್ಚು ಅರ್ಹನು. ಸ್ವರ್ಗವು ಊಹೆಗೂ ಮೀರಿದ ಸೌಂದರ್ಯದಿಂದ ಅಲಂಕರಿಸಲ್ಪಟ್ಟಿದೆ. ದೇವನು ಸುಂದರವಾಗಿರುವುದರಿಂದಲೇ ಸ್ವರ್ಗದಲ್ಲಿರುವ ಎಲ್ಲ ಸಂತೋಷಗಳಲ್ಲಿ ಅತಿದೊಡ್ಡ ಸಂತೋಷವು ದೇವನ ಮುಖವನ್ನು ನೋಡುವುದಾ-

ಗಿದೆ. “ಆ ದಿನ [ಕೆಲವು] ಮುಖಗಳು ಕಾಂತಿಯುಕ್ತವಾಗಿರುತ್ತವೆ, ತಮ್ಮ ಕರ್ತನ ಕಡೆಗೆ ನೋಡುತ್ತಿರುತ್ತವೆ.” (ಕುರ್‌ಆನ್ 75: 22-23)

ದೇವನು ತನ್ನ ಹೆಸರುಗಳನ್ನು ಅತ್ಯಂತ ಸುಂದರ ಎನ್ನುತ್ತಾನೆ: “ಅತ್ಯಂತ ಸುಂದರವಾದ ಹೆಸರುಗಳು ಅಲ್ಲಾಹನಿಗೆ ಸೇರಿವೆ. ಆದ್ದರಿಂದ ಅವುಗಳ ಮೂಲಕ ಆತನನ್ನು ಕರೆದು ಪ್ರಾರ್ಥಿಸಿರಿ...” (ಕುರ್‌ಆನ್ 7:180)

ಖ್ಯಾತ ಇಸ್ಲಾಮಿಕ್ ವಿದ್ವಾಂಸ ಇಬ್ನುಲ್ ಖಯ್ಯಿಮ್ ಇಸ್ಲಾಮಿನ ಸೌಂದರ್ಯದ ಬಗ್ಗೆ ಹೇಳುತ್ತಾರೆ, “ದೇವನ ಸೌಂದರ್ಯಕ್ಕೆ ಯಾವುದೂ ಸಾಟಿಯಲ್ಲ. ಆದ್ದರಿಂದ ಮಾತಿನಲ್ಲಿ, ಕೆಲಸದಲ್ಲಿ ಮತ್ತು ಸ್ವಭಾವದಲ್ಲಿ ದೇವನು ಪ್ರೀತಿಸುವ ಸೌಂದರ್ಯದ ಮೂಲಕ ಆತನನ್ನು ಆರಾಧಿಸಬೇಕು. ನಾಲಿಗೆಯನ್ನು ಸತ್ಯದಿಂದ ಸುಂದರಗೊಳಿಸುವ, ಹೃದಯವನ್ನು ಪ್ರಾಮಾಣಿಕತೆ, ಭಕ್ತಿ, ಪ್ರೀತಿ, ಪಶ್ಚಾತ್ತಾಪ ಮತ್ತು ನಂಬಿಕೆಯಿಂದ ಸುಂದರಗೊಳಿಸುವ, ದೇಹವ-

ನ್ನು ಹೊಲಸು, ಕೊಳಕು ಮತ್ತು ಅಶುದ್ಧಿಗಳಿಂದ ಮುಕ್ತ-ವಾಗಿಸಿ ಸುಂದರ ಉಡುಪುಗಳನ್ನು ಧರಿಸುವುದರಿಂದ ಸುಂದರಗೊಳಿಸುವ ದಾಸರನ್ನು ದೇವನು ಪ್ರೀತಿಸುತ್ತಾನೆ. ಹೀಗೆ ದಾಸರು ಸೌಂದರ್ಯದ ಈ ಗುಣಗಳ ಮೂಲಕ ದೇವನನ್ನು ಗುರುತಿಸುತ್ತಾರೆ ಮತ್ತು ಸುಂದರವಾದ ಮಾತುಗಳು, ಕೆಲಸಗಳು ಮತ್ತು ಸ್ವಭಾವಗಳ ಮೂಲಕ ಆತನಿಗೆ ಹತ್ತಿರವಾಗಲು ಪ್ರಯತ್ನಿಸುತ್ತಾರೆ. ಸೌಂದರ್ಯ-ವೆಂಬ ಅವನ ಗುಣವಿಶೇಷಣದ ಮೂಲಕ ಆತನನ್ನು ಅಂಗೀಕರಿಸಿ ಅವನು ಆಜ್ಞಾಪಿಸಿದ ಸೌಂದರ್ಯ ಮತ್ತು ಅವನ ಧರ್ಮದ ಮೂಲಕ ಆತನನ್ನು ಆರಾಧಿಸುತ್ತಾರೆ.”